## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 148
2. ಮಾನ್ಯ ಸದಸ್ಯರ ಹೆಸರು ಶ್ರೀ ಯು.ಬಿ. ವೆಂಕಟೇಶ್ (ನಾಮ ನಿರ್ದೇಶನ ಹೊಂದಿದವರು)
3. ಉತ್ತರಿಸಬೇಕಾದ ದಿನಾಂಕ 21/09/2020
4. ಉತ್ತರಿಸುವವರು ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2020-21 ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ರಾಜ್ಯಾದ್ಯಂತ ಕಟ್ಟಡ ಕಾರ್ಮಿಕರ ಆರು ವರ್ಷದೊಳಗಿನ ಮಕ್ಕಳ ಪಾಲನೆ ಮಾಡಲು ಕಟ್ಟಡ ನಿರ್ಮಾಣ ಸ್ಥಳಗಳಲ್ಲಿ ಹತ್ತು ಸಂಚಾರಿ ಶಿಶುಪಾಲನಾ ಕೇಂದ್ರಗಳನ್ನು ಒಳಗೊಂಡಂತೆ ಎಷ್ಟು ಶಿಶುಪಾಲನಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆಯೇ: | 2020-21ನೇ ಸಾಲಿನ ಆಯವ್ಯಯದಲ್ಲಿ ಘೋಷಣೆ ಮಾಡಿದಂತೆ ಶಿಶುಪಾಲನಾ ಕೇಂದ್ರಗಳ ಸ್ಥಾಪನೆಯು ಕಾರ್ಯ ಪ್ರಗತಿಯಲ್ಲಿರುತ್ತದೆ. |
| ಆ) | ಸ್ಥಾಪಿಸಿದ್ದಲ್ಲಿ, ಇದುವರೆಗೂ ಎಷ್ಟು ಜನ ಫಲಾನುಭವಿಗಳು ಇದರ ಪ್ರಯೋಜನ ಪಡೆದುಕೊಂಡಿದ್ದಾರೆ. | 2018-19ನೇ ಸಾಲಿನ ಆಯವ್ಯಯ ಘೋಷಣೆಯಂತೆ ಪ್ರಾಯೋಗಿಕವಾಗಿ 10 ಶಿಶುಪಾಲನಾ ಕೇಂದ್ರಗಳನ್ನು ತೆರೆಯಲಾಗಿದ್ದು, ಇವುಗಳಿಂದ 759 ಮಕ್ಕಳು ಪ್ರಯೋಜನವನ್ನು ಪಡೆದುಕೊಂಡಿರುತ್ತಾರೆ. ಅದರ ಕೇಂದ್ರವಾರು ವಿವರದ ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಿದೆ. |
| ಇ) | ಈ ಯೋಜನೆಯನ್ನು ಪ್ರಾರಂಭಿಸದೇ ಇದ್ದಲ್ಲಿ ಯಾವಾಗ ಆರಂಭಿಸಲಾಗುವುದು: ವಿಳಂಬಕ್ಕೆ ಕಾರಣಗಳೇನು?<br>(ಈ ಬಗ್ಗೆ ಜಿಲ್ಲಾವಾರು ಮಾಹಿತಿ ಒದಗಿಸುವುದು) | ಕೋವಿಡ್-19 ಹಿನ್ನೆಲೆಯಲ್ಲಿ ಹೊಸ ಯೋಜನೆಗಳನ್ನು ಪ್ರಾರಂಭಿಸಲು ವಿಳಂಬವಾಗಿರುತ್ತದೆ. ಶಿಶುಪಾಲನಾ ಕೇಂದ್ರಗಳನ್ನು ತೆರೆಯಲು ಸ್ಥಳಗಳನ್ನು ಗುರುತಿಸಲು ಈಗಾಗಲೇ ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಗೆ ನಿರ್ದೇಶನಗಳನ್ನು ನೀಡಲಾಗಿರುತ್ತದೆ. ಸದರಿ ಕಾರ್ಯವು ಪ್ರಗತಿಯಲ್ಲಿರುತ್ತದೆ. |

ಕಾಇ 291 ಎಲ್ಇಟಿ 2020

(ಅರಬೈಲ್ ಶಿವರಾಂ ಹೆಬ್ಬಾರ್)
ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

## ಅನುಬಂಧ

## ಬೆಂಗಳೂರಿನಲ್ಲಿ ಪ್ರಸ್ತುತ ತೆರೆದಿರುವ 10 ಶಿಶುಪಾಲನ ಕೇಂದ್ರಗಳ ವಿವರ

| ಕ್ರ.ಸಂ | ಶಿಶುಪಾಲನಾ ಕೇಂದ್ರದ ಸ್ಥಳ | ಮಕ್ಕಳ ಸಂಖ್ಯೆ | | ಒಟ್ಟು |
|---|---|---|---|---|
| | | ಗಂಡು | ಹೆಣ್ಣು | |
| 1 | ಜೆ.ಎಂ.ಸಿ ಬ್ರಿಗೇಡ್ ಉಟೋಪಿಯಾ, ವರ್ತೂರು | 32 | 34 | 66 |
| 2 | ಬಿ.ಡಬ್ಲ್ಯೂ.ಎಸ್.ಎಸ್.ಬಿ., ಹೆಬ್ಬಾಳ | 49 | 39 | 88 |
| 3 | ಲೇಬರ್ ಕಾಲೋನಿ, ಪಟಾಲಮ್ಮ ಲೇಔಟ್, ಚನ್ನಸಂದ್ರ, ಕಾಡುಗೋಡಿ | 116 | 81 | 197 |
| 4 | ಡಾ।। ಬಿ.ಆರ್.ಅಂಬೇಡ್ಕರ್ ಸ್ಕೂಲ್ ಆಫ್ ಎಕನಾಮಿಕ್ಸ್, ಜ್ಞಾನಭಾರತಿ ಕ್ಯಾಂಪಸ್, ನಾಗರಬಾವಿ | 39 | 48 | 87 |
| 5 | ಶಿಪಾನಿ ರಾಯಲ್ ಹೆರಿಟೇಜ್ ಕನ್‌ಸ್ಟ್ರಕ್ಷನ್ ಸೈಟ್, ಚಂದಾಪುರ | 17 | 31 | 48 |
| 6 | ಜೆ.ಎಂ.ಸಿ ಎಸ್.ಜೆ.ಆರ್.ಆರ್, ಚಂದಾಪುರ | 30 | 14 | 44 |
| 7 | ಲೇಬರ್ ಕಾಲೋನಿ, ಚೀಮಸಂದ್ರ | 40 | 47 | 87 |
| 8 | ಎಂ.ಎಸ್.ರಾಮಯ್ಯ ಕನ್‌ಸ್ಟ್ರಕ್ಷನ್, ಮತ್ತಿಕೆರೆ – 1 | 31 | 39 | 70 |
| 9 | ಎಂ.ಎಸ್.ರಾಮಯ್ಯ ಕನ್‌ಸ್ಟ್ರಕ್ಷನ್, ಮತ್ತಿಕೆರೆ – 2 | 39 | 16 | 55 |
| 10 | ಮೆ।। ಆದರ್ಶ್ ಪ್ರೀಮಿಯ, ಕದಿರೇನಹಳ್ಳಿ, ಬನಶಂಕರಿ | 10 | 07 | 17 |
| | ಒಟ್ಟು | 403 | 356 | 759 |